

# कर्णाटक महिम्नः स्तोत्रम

(तंत्र शास्त्र)

—अंदानप्पा दोड्डमेटि

# ಕರ್ಣಾಟಕ ಮಹಿಮ್ನಃ ಸ್ತೋತ್ರ

(ತಂತ್ರ ಶಾಸ್ತ್ರ)

—ಅಂದಾನಪ್ಪ ದೊಡ್ಡಮೇಟಿ

# कर्णाटक महिम्नः स्तोत्रम

( तंत्र शास्त्र )

—अंदानप्पा दोड्डमेटि



# ಕರ್ಣಾಟಕ ಮಹಿಮ್ನಃ ಸ್ತೋತ್ರ

( ತಂತ್ರ ಶಾಸ್ತ್ರ )

—ಅಂದಾನಪ್ಪ ದೊಡ್ಡಮೇಟಿ



# कर्णाटक महिम्नः स्तोत्रम

( तंत्र शास्त्र )

—अंदानप्पा दोड्डमेटि

# ಕರ್ಣಾಟಕ ಮಹಿಮ್ನಃ ಸ್ತೋತ್ರ

( ತಂತ್ರ ಶಾಸ್ತ್ರ )

—ಅಂದಾನಪ್ಪ ದೊಡ್ಡಮೇಟಿ

ಪ್ರಕಾಶಕರು:
ಅಂದಾನಸಪ್ಪ ದೊಡ್ಡಮೇಟಿ
೨ ಜಯಮಹಲ ಬಡಾವಣೆ
ಬೆಂಗಳೂರು

ಮೂರನೆಯ ಆವೃತ್ತಿ
೧೯೬೯

ಮುದ್ರಕರು :
ಬೃಂದಾವನ್ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, (ಪ್ರೈ) ಲಿ.,
೧೨/೧೩ ಲಾಲ್‌ಬಾಗ್ ಫೋರ್ಟ್ ರೋಡ್,
ಬೆಂಗಳೂರು-೪.

# ಸ್ವಗತ



ಈ ಸ್ತೋತ್ರಗಳನ್ನು ನಾನು ಹೇಳಲಿಲ್ಲ. ಚಿಂತನೆಯಲ್ಲಿ ಚಿಗುರೊಡೆದ ಈ ಮಾತುಗಳನ್ನು "ಕರ್ಣಾಟಕ ಮಹಿಮ್ನ : ಸ್ತೋತ್ರ" ಎಂದು ಕರೆದಿದ್ದೇನೆ ಅಷ್ಟೆ. ಈ ಸ್ತೋತ್ರಗಳ ವೈಖರಿಗೆ ನಾನು ನಿಮಿತ್ತ ಮಾತ್ರ ; ಇವುಗಳ ಪ್ರೇರಕಳು ಮಂತ್ರಮಯಿ ಕರ್ಣಾಟಕ ಮಾತೆ! ಈ ಸ್ತೋತ್ರಗಳೆಲ್ಲ ಚಿಂತನೆಯ ಆಕೃತಿ ಮಾತ್ರ. ಇವುಗಳ ಶಬ್ದ ಆ ಚಿಂತನೆಯ ಸ್ಥೂಲ ಪ್ರಕೃತಿ ; ಈ ಪ್ರಕೃತಿಯ ಅಧ್ಯಕ್ಷತೆ ವಹಿಸಿದ ಪುರುಷನೇ ಇವುಗಳ ಅರ್ಥ. ಎಂದರೆ ಈ ಪ್ರಕೃತಿ-ಪುರುಷ ದರ್ಶನವೆ ಈ ಸ್ತೋತ್ರಗಳ ಪುರುಷಾರ್ಥವಲ್ಲ; ಅವುಗಳನ್ನು ಮೀರಿದ ಅನುಭವ—ಪುರುಷೋತ್ತಮನೆ ಗಂತವ್ಯ—ಮಂತವ್ಯನೆಂದರಿತರೆ ಸಾಕು. ಇದು ಅಹಂಕೃತಿಯಲ್ಲ; ಭಾವಸಂಸ್ಕೃತಿ.

ಕರ್ಣಾಟಕ ದರ್ಶನದ ನಮ್ಮ ದೃಷ್ಟಿ ಇಂದು ದೈವಿಕವಾಗುವದು ಅಗತ್ಯವಿದ್ದಂತೆ ನಮ್ಮ ಮನಃಶುದ್ಧಿಗಾಗಿ, ಕಾರ್ಯಸಿದ್ಧಿಗಾಗಿ ಈ ಸ್ತೋತ್ರಗಳು ಮಂತ್ರವಾಗುವದು ಅವಶ್ಯ. ಇವುಗಳ ಮನನದಿಂದ ಕರ್ಣಾಟಕದ ದಿವ್ಯದರ್ಶನ ಸಾಧ್ಯವಾದರೆ ಈ ಮಾತುಗಳೆಲ್ಲ ಜ್ಯೋತಿಗಳು. ಕನ್ನಾಡಿನ ಒಂದು ಸತ್ವಶುದ್ಧಿಗಾಗಿ ಸತ್ವಸಿದ್ಧಿಗಾಗಿ ಈ ಸ್ತೋತ್ರ ಮಂಡಲದಲ್ಲಿ ಶ್ರದ್ಧೆ ತಾಳಬೇಕು. ಕನ್ನಡ ಸಾವಿತ್ರಿ, ಈ ಮಾತು ಮನನ ಮಾಡುವ ಧೀಶಕ್ತಿಯನ್ನು ನಮಗೆ ಕರುಣಿಸಲಿ, ಕನ್ನಡ ಗಾಯತ್ರಿ ತನ್ನ ಶಕ್ತಿಪುತ್ರರಿಗೆ ಕರುಣಾ ಕವಚ ತೊಡಿಸಿ ಕಾಪಾಡಲಿ!

ಕರ್ಣಾಟಕಾಂಬೆ ತನ್ನ ವಿಚ್ಛೇದದ ಮಂಕ್ತಾಯ ನಾಟಕದ ಪ್ರಥಮಾಂಕವನ್ನು ಪೂರ್ತಿಗೊಳಿಸಿದಳು. ಅವಳ ಸಂಕಲ್ಪ ಇನ್ನೂ .ಇನ್ನೂ ಸಿದ್ಧಿಸಿ ಮಾತೆಯ ದಿವ್ಯ ದರ್ಶನದ ಪರಿಪೂರ್ಣತೆಯ ಲೀಲೆ ಲೋಕವನ್ನೆಲ್ಲ ಬೆಳಗಬೇಕಾಗಿದೆ. ಅವಳ ಇಂದಿನ ಏಕತ್ವವು ಕೇವಲ ನೆಲದ್ದು ಮಾತ್ರ. ಪ್ರಾಣ ಮನಗಳ ಏಕತ್ವವು ಇನ್ನೂ ಸಾಧಿಸಬೇಕಾದ ಸಿದ್ಧಿ.

ಇದಕ್ಕಾಗಿ ಕನ್ನಡಿಗರಿಗೆ ಕೈಪಿಡಿಯಾಗಿ "ಕರ್ಣಾಟಕ ಮಹಿಮ್ನ ; ಸ್ತೋತ್ರ"ವು ತೃತೀಯ ಮುದ್ರಣ ತಾಳಿ ಹೊರಬಂದಿದೆ. ಇದೂ ಆಕೆಯ ಇಚ್ಛೆಯೇ ಸರಿ. ಮಂತ್ರಗಳನ್ನು ಸಂಸ್ಕೃತಕ್ಕೆ ಅನುವಾದ ಮಾಡಿಕೊಟ್ಟ ವಿದ್ವಾನ್ ಹ. ವೆ. ನಾರಾಯಣ ಶಾಸ್ತ್ರಿಗಳಿಗೂ, ಮಂತ್ರಗಳಿಗೆ ಅನುಗುಣವಾಗಿ ರೇಖಾಚಿತ್ರಗಳನ್ನು ಬರೆದುಕೊಟ್ಟ ಶಿಲ್ಪಿ ಶ್ರೀ ಕೊಂಡಾಚಾರಿಯವರಿಗೂ ನಾನು ಅತ್ಯಂತ ಋಣಿಯಾಗಿದ್ದೇನೆ. ಮಾತೆಯ ಮಮತೆ ಅವರನ್ನು ಸದೈವ ಕಾಪಾಡಲಿ.

ಬೆಂಗಳೂರು
೧೯—೪—೧೯೬೬

ಅಂದಾನಪ್ಪ ದೊಡ್ಡಮೇಟಿ

१

परात्परमहाशक्ते मातर्भारतमेदिनि ।
एकाऽपि त्वमनेकासि स्वेच्छालीलाविभूतये ॥

इयं कर्णाटवसुधा त्वदङ्कपरिवर्तिनी ।
स्वाङ्गभङ्गरुजस्सर्वाः सहमाना मुदा सदा ॥

तव मुक्तिमहायज्ञे कृशातामनयत्तनूम् ।
इदानीं मातरुन्मुक्ता दिष्ट्या त्वं हूणबन्धनात् ॥

पश्याद्य तव वत्सेयं संतापाद् दुर्मनायते ।
कर्णाटनामकलिता नन्दिनी भारताम्बिके ॥

कठोरतपसा तस्याः प्रसन्नाऽगच्छ सन्निधिम् ।
कल्याणशक्ते मुदितां कुरु तामपि ते सुताम् ॥





ಪರಾಶಕ್ತಿ



೧

ಓ ಮಾತೆ ಭಾರತಾಂಬೆ ಪರಾತ್ಪರ ಶಕ್ತಿ!
ಏಕಳಾಗಿಹ ನೀನೆ, ಅನೇಕರೂಪಳಾದೆ ನೀನೆ, ನಿನ್ನ ಲೀಲೆಗಾಗಿ!
ನಿನ್ನ ನಚ್ಚಿನ ಕುವರಿ – ಕರ್ಣಾಟ ದೇವಿ.
ತನ್ನಂಗಭಂಗದ ನೋವನೆಲ್ಲವ ನುಂಗಿ
ನಿನ್ನ ಮುಕ್ತಿಯಜ್ಞದಲಿ ಮೈಯ ಸವಿಸಿಹಳು!
ಓ ಜನನಿ, ಉನ್ಮುಕ್ತೆ ನೀನಿಂದು
ನೋಡಿದೊ ಇಲ್ಲಿ ಪರಿತಪಿಸುತಿಹಳಿಲ್ಲಿ
ನಿನ್ನಣುಗಿ ಮುದ್ದು ಕರ್ಣಾಟ ಕುವರಿ
ಅವಳ ತಪಕೆ ಮೆಚ್ಚಿ ಬಾರೌ!
ಹರಸಿ ಮುದವತೋರೌ ಜನನಿ, ಕಲ್ಯಾಣ ಶಕ್ತಿ!

२

कर्णाटकमहाशक्ते भुवनेश्वरि पावने ।
राजाधिराजमुकुटे पादमुद्रा विभाति ते ॥

तरङ्गाकारकलितां तवैव करुणामियम् ।
वहन्ती प्रवहत्यम्ब तुङ्गभद्रातरङ्गिणी ॥

का त्वं ? भगवती नूनं ननु त्वं भुवनेश्वरी ।
सर्वथा पतितान् पुत्रान् । सर्वेश्वरि समुद्धर ॥

सदा सर्वसमाराध्ये कर्णाटकुलदेवते ।
आविर्भव जगन्मातरस्मन्मानसमंदिरे ॥

हृदये तव डिम्भानां रूढमूलां दुरायतिम् ।
समूलं छिंधि जननि कुलघातमहाद्रमम् ॥

निपत्य पादयोर्मूर्ध्ना मातर्याचामहे वयम् ।
एकस्मिन्नेव बन्धेऽस्मद्धृदयानि बधान नः ॥

एकस्मिन्नेव सन्दोहे सुस्थिरं वर्तयामहे ।
समानहृदयास्सर्वे तथाम्बानुग्रहं कुरु ॥





ಭುವನೇಶ್ವರಿ



೨

ಓ ಜನನಿ,
ಭುವನೇಶ್ವರಿಯೆ, ಕರ್ಣಾಟ ಮಹಾಶಕ್ತಿ!
ರಾಜರಾಜರ ಮುಕುಟದಲಿದೆ ನಿನ್ನ ಪಾದ ಮುದ್ರೆ!
ನಿನ್ನ ಕೃಪೆಯನೆ ಹೊತ್ತು ಹರಿಯುವಳು ತುಂಗಭದ್ರೆ!
ಭುವನದಧೀಶ್ವರಿಯು ಅಲ್ಲವೆ ಅಂಬೆ ನೀನು?
ಸರ್ವವಿಧದಿಂ ಕುಸಿದ ಮಕ್ಕಳನೆತ್ತು ಸರ್ವೇಶ್ವರಿಯೆ!
ಓ ಕನ್ನಡ ಕುಲದೇವಿ! ನಿತ್ಯ ಪೂಜ್ಯಳು ನೀನು—
ನಮ್ಮ ಹೃದಯಮಂದಿರದಲ್ಲಿ ನೀನೆ ಒಡಮೂಡು ಬಾ!
ನಿನ್ನ ಮಕ್ಕಳೆದೆಯಲ್ಲಿ ಮರವಾಗಿ ಬೆಳೆದಿರುವ
ಮನೆಮುರುಕುತನವ ಕಳೆಯಮ್ಮಾ
ನಿನ್ನಡಿಗೆ ಪೊಡಮಟ್ಟು ಕೇಳುವೆವು—
ಒಂದೇ ಕಟ್ಟಿನಲಿ ನಮ್ಮ ಮನವನೊಲಿಸು
ಒಂದೇ ಕೂಟದಲಿ ನಮ್ಮ ಜನವನು ನಿಲಿಸು!

### ३

अयि ! कर्णाटमहेश्वरि भगवति ! वातापिवाससंमुदिते ।
जननि वनशङ्करि त्वं वृद्धेस्संवर्धनी सततम् ॥

वभवविधात्रि ! मातः भवदीयमहोन्नतेर्महाघोषम् ।
प्रथयति कलैव सम्यक् जननि शिलारूपतामेत्य ॥

अस्मद्धृदयगुहायां लीनं स्वार्थान्धकारसंतानम् ।
परिहर जगतीमातः करकरवालप्रभाविसरैः ॥

दशदिग्भ्यश्च प्रसभं समभिक्राम्यन्ति ये च नस्सततम् ।
घोरभयदैन्यलाघवदोषास्ते संप्रणश्यंतु ॥

दृढतरसुधीरभावं दिव्यं वितराम्ब पुत्रनिकरेभ्यः ।
तव संततिहृदयाब्जे आविर्भवतात्त्वमेवाशु ॥

हृद्वनवलये मातः विलसतु कर्णाटसत्कुलस्यास्य ।
भूमानुभूतिरतुला प्रसीद मातः प्रसीद त्वम् ॥





ಮಹೇಶ್ವರಿ



### ೩

ಓ ಕರ್ಣಾಟ ಮಹೇಶ್ವರಿಯೆ !
ವಾತಾಪಿಪುರವಾಸಿನೀ ಅಂಬೆ ಬನಶಂಕರಿ !
ವೃದ್ಧಿವರ್ಧಿನಿಯೆ, ವೈಭವವಿಧಾತ್ರಿ ನೀನು !
ಓ ಜನನಿ, ನಿನ್ನ ಮಹೋನ್ನತಿಯ ಗಂಭೀರ ಘೋಷವನು
ಕೂಗುತಿದೆ ಕಲೆಯೇ ಕಲ್ಲಾಗಿ !
ನಮ್ಮೆದೆಯ ಸ್ವಾರ್ಥತಿಮಿರವನು ನಿನ್ನ ಕೈಯ
ಕರವಾಳಕಾಂತಿಯಿಂ ಕಳೆಯೆ, ದೇವಿ !
ಹತ್ತು ದಿಕ್ಕಿನಿಂ ಏರಿಬರುತಿರುವ ಘೋರ ಭಯ
ದೈನ್ಯ ಕ್ಷುದ್ರತೆಗಳನು ಪರಿಹರಿಸಿ ದಿವ್ಯ ಧೀರತೆಯ ನೀಡು
ನಿನ್ನ ಸಂತಾನದೆದೆಯಲ್ಲಿ ನೀನೆ ಆವಿರ್ಭವಿಸು !
ನಿನ್ನ ಹೃದ್ವನದ ವಲಯದಲಿ ಕನ್ನಡ ಕುಲಕೆ
ಭೂಮಾನುಭೂತಿಯನು ಕರುಣಿಸಮ್ಮ

४

हे कर्णाटमहाकालि चन्डि चामुण्डिकेश्वरि ।
महिषान्तोद्भवे देवि राजराजेश्वरीश्वरि ॥

न केवलं महीशूरुकुलदेवी भवत्यसि ।
माता त्वमधिदेवी त्वं कर्णाटस्याखिलस्य च ॥

महीशूरुसुतानां त्वं विदह्य मनसि स्थितम् ।
द्वैतभावं तथा चित्ते भयं शङ्कां च वारय ॥

वीरमार्गं निर्दिशसि त्वं मातस्सिंहवाहने ।
प्रसुप्तं चेतनं देवि प्रबोधय कृपानिधे ॥

सज्जीकुरु सुतानेतान् कार्यनिष्पादनाय ते ।
उद्दामधीरतां देहि भेदभावं निवारय ॥

त्रोटय स्वार्थनिगलं अहंपूर्विकया धिया ।
पुरोगन्तुं पुरोगन्तु बलं मातः प्रयच्छ नः ॥

भद्रे ! भक्तजनानां ते शोणितौघो रणांगणे ।
कावेरीव प्रवहतात् वरमेनं प्रदेहि नः ॥





ಮಹಾಕಾಳಿ



೪

ಓ ಕರ್ಣಾಟ ಮಹಾಕಾಲಿ, ಚಂಡಿ ಚಾಮುಂಡೇಶ್ವರಿಯೆ!
ಮಹಿಷಮರ್ದಿನಿಯೆ, ರಾಜರಾಜೇಶ್ವರಿಯೆ!
ಮೈಸೂರು ಕುಲದೇವಿ ಮಾತ್ರ ನೀನಲ್ಲ ಮಾತೆ!
ಸಮಸ್ತ ಕನ್ನಡಿಗರಧಿದೇವಿ ನೀ!
ಮೈಸೂರು ಮಕ್ಕಳ ಮನದ ದ್ವೈತವ ದಹಿಸಿ
ಅವರೆದೆಯ ಶಂಕೆ – ಭಯಗಳನು ಸಂಹರಿಸಿ
ವೀರಮಾರ್ಗವ ತೋರ್ದೆ ಸಿಂಹವಾಹಿನಿಯೆ!
ಸುಪ್ತ ಚೇತನವನೆಚ್ಚರಿಸು, ನಿನ್ನ ಕಾರ್ಯಕ್ಕೆ
ನಮ್ಮನಣಿಗೊಳಿಸಿ ಉದ್ದಂಡ ಧೈರ್ಯವ ನೀಡು!
ಭಿನ್ನ ಭಾವವ ತೊರೆದು, ಸ್ವಾರ್ಥಬಂಧವ ಹರಿದು,
ಮುಂಬರಿವ, ಮುಂಬರುವ ಬಲವ ನೀಡು
ನಿನ್ನ ಭಕ್ತರ ನೆತ್ತರಲಿ ಕಾವೇರಿ ಹರಿವಂತೆ ಹರಸು! ಭದ್ರೆ

५

कर्णाटकमहालक्ष्मि रेणुकाम्ब नमोस्तु ते ।
शरण्ये त्र्यम्बके गौरि जगदम्ब नमोस्तु ते ॥

संघशः संघशस्सर्वे जनास्त्वां जयघोषणैः ।
वर्धयन्ति महादेवि तव प्रीतिविवर्धनैः ॥

तमः प्रपूर्य हृदयं प्रसर्पत् प्रविनाशय
आनंदरससंपूर्णं आत्मज्योतिः प्रकाशय ॥

मर्दयित्वाऽतिसंक्रुद्धान् दीनान् बद्धान् समुद्धर ।
सिद्धबुद्धान् सृजन्ती त्वं उत्तिष्ठोत्तिष्ठ मङ्गले ॥







೫

ಕರ್ಣಾಟ ಮಹಾಲಕ್ಷ್ಮಿ ಜನನಿ ರೇಣುಕೆ !
ಶರಣೆಂಬೆ, ಗೌರಿ ತ್ರ್ಯಂಬಕೇ,
ಜಗದಂಬೆ ನಮೋ ಎಂಬೆ !
ಜನವೆ ತಿಂತಿಣಿಗಟ್ಟಿ ನಿನ್ನ ಪಾದಕ್ಕೆ
ಉಧೋ ಉಧೋ ಎನ್ನುತಿದೆ !
ಹೃದಯ ತುಂಬಿ ಹಬ್ಬಿರುವ ತಮವ ಕಳೆಯೆ !
ಮುದವ ತುಂಬುವ ಆತ್ಮಜ್ಯೋತಿಯನು ಬೆಳಗೆ !
ತುಳಿದು ಕ್ರುದ್ಧರನು, ಎತ್ತು ಬಡ ಬದ್ಧರನು !
ಸಿದ್ಧ ಬುದ್ಧರನು ಹುಟ್ಟಿಸೇಳು ಏಳು ಜನನಿ

६

अयि भो महासरस्वति शृङ्गाद्रिनिकेतने महादेवि ।
अवतर शृङ्गमहीध्रात् श्रीमत्कर्णाटजननि त्वम् ॥

त्यज लेखनिकां सद्यः निशितं हस्ते गृहाण करवालम् ।
असज्जाड्यविलासं परिहर भोगेऽधिकां च तृषम् ॥

हे मंत्रशक्तिरूपिणि उपदिश मे त्यागयोगमहिमानम् ।
वयमम्ब यन्त्ररूपाः यन्त्रारूढाऽसि ननु भवती ॥

यन्त्राधिष्ठितपुरुषः यत्र वर्तयति तद्वदेव त्वम् ।
ब्रह्माणि देवि मातः नियन्त्रयास्मान् त्वदायत्तान् ॥







೬

ಓ ಮಹಾಸರಸ್ವತಿಯೆ, ಶೃಂಗೇರಿ ಶಾರದೆಯೆ!
ಶೃಂಗಗಿರಿ ಇಳಿದು ಬಾ ಮಾತೆ, ಕರ್ಣಾಟಕಾಂಬೆ
ಲೆಕ್ಕಣಿಕೆಬಿಟ್ಟಿಂದು ಕೂರಸಿಯ ತೊಡು ತಾಯಿ!
ನಮ್ಮಲಸ ವಿಲಾಸವನು, ಭೋಗದಾಹವನು
ನೀಗಿಸಮ್ಮ ತ್ಯಾಗಯೋಗವನೊರೆದು!
ಓ ಮಂತ್ರಶಕ್ತಿ
ನಾವು ಬರಿ ಯಂತ್ರಗಳು, ನೀನು ಯಂತ್ರಾರೂಢೆ
ನಮ್ಮ ನಿಯಂತ್ರಿಸೌ ಜನನಿ ಬ್ರಹ್ಮಾಣಿ!

७

पञ्चप्राणकलारूपे जनशक्तिस्वरूपिणि ।
देवि मूकाम्बिके मातः भार्गवक्षेत्रनायिके ॥

वत्सानां तव हे मातः पञ्चप्राणेषु संस्थिता ।
तव लीलासमुत्कर्षं परिपूरय सांप्रतम् ॥

त्वदीयं समयं तद्वत् संकल्पं च त्वमेव हि ।
साधयस्यम्बिके नूनं स्वेच्छयैव महेश्वरि ॥

त्वदर्चायां तु ये विघ्नाः संभवेयुरथाम्बिके ।
तेषां प्रमार्जने शक्तिं प्रयच्छ परमेश्वरि ॥

तानानेतुं पुरोभागं पश्चात्तिष्ठन्ति ये जनाः ।
बुद्धियोगं प्रदायैकपूजां स्वीकुरु सर्वदा ॥



ಮೂಕಾಂಬಿಕಾ



೭

ಓ ಅಂಬೆ, ಜನಶಕ್ತಿ, ಕರ್ಣಾಟ ಪ್ರಾಣಪಂಚಕಳೆ !
ದೇವಿ ಮೂಕಾಂಬೆ ; ಪರಶುರಾಮ ಕ್ಷೇತ್ರಾಧಿವಾಸಿನಿ !
ನಿನ್ನ ಕಂದರ ಪಂಚಪ್ರಾಣದಲಿ ನಿಂತು ··
ನಿನ್ನ ಲೀಲೆಯನೀಗ ಪರಿಪೂರ್ತಿಗೊಳಿಸು !
ನಿನ್ನ ಸಮಯ ಸಂಕಲ್ಪ ನೀನೆ ಸಾಧಿಸುತಿರುವಿ !
ನಿನ್ನ ಅರ್ಚನೆಗೆ ತೊಡಕಾದ ಎಡರುಗಳ
ತೊಡೆದು ಹಾಕುವ ಬಲವ ನೀಡು ಜನನಿ !
ಹಿಂದೆ ನಿಂದವರ ಮುಂದಕೆ ಒಯ್ಯುವ ಮನವ
ನೀನಿತ್ತು ಒಂದೆ ಪೂಜೆಯ ಕೊಳ್ಳು ಜನನಿ !

८

हे जननि रत्नगर्भे कर्णाटवसुंधरामहाशक्ते ।
परमेश्वरि कृतवसते वरतीरे चंद्रभागायाः ॥

न त्वं मृत्स्ना न शिला न झरी नैवांब केवला तटिनी ।
न जडा न हि मृद्रूपा मातस्त्वं चिन्मयी शक्तिः ॥

जननि त्वं रुक्ममयी जीवनशक्तिस्त्वमस्माकम् ।
ॐकाराभिव्यक्तिः भारतजननीतनूजाते ॥







೮

ಓ ಮಾತೆ, ರತ್ನಗರ್ಭೆ, ಕರ್ನಾಟ ಭೂಶಕ್ತಿ !
ದೇವಿ ಪರಮೇಶ್ವರಿ, ಚಂದ್ರಭಾಗಾತಟಸ್ಥೆ !
ಕಲ್ಲು ಮಣ್ಣುಗಳು ನೀನಲ್ಲ—
ಬರಿ ಝರಿ ಹೊನಲುಗಳು ಅಲ್ಲ ನೀ ಮಾತೆ !
ಜಡವಲ್ಲ ನೀನು, ಅಲ್ಲ ಮೃಣ್ಮಯಳು,
ಚಿನ್ಮಯಳು ಅಂಬೆ, ನೀ ಹಿರಣ್ಮಯಳು !
ನಮ್ಮ ಜೀವನದ ಶಕ್ತಿ ನೀ ಓಂಕಾರದ
ಅಭಿವ್ಯಕ್ತಿ ನೀ, ಜನನಿ ಕರ್ನಾಟ ಮಾತೆ
ಭಾರತಾಂಬೆಯ ತನೂಜಾತೆ

९

गोकर्णक्षेत्रनिलये मातः श्रीभद्रकर्णिके ।
कर्णाटदुर्गे जननि पादाभ्यां ते शपामहे ॥

उत्थिताः स्मोऽद्य हे मातः तव संकल्पसाधने ।
अग्निमार्गे पदं कृत्वा प्रयामस्त्वरसाग्रतः ॥

भावज्वालापुष्पमालां विन्यस्य तव पादयोः ।
प्राणपूर्णफलं मातः प्रमोदादर्पयामहे ॥

उद्दामधैर्यमस्मभ्यं वितीर्यानुग्रहं कुरु ।
प्रदक्षिणार्थमायाताः दक्षतां देहि सुस्थिराम् ॥

हे कर्णाटमहादेवि सर्वभीतिविनाशिनि ।
त्वदीयानुग्रहो मातः अस्मानुद्दीपयिष्यति ॥





ಶ್ರೀ ದುರ್ಗೆ



೯

ಓ ಮಾತೆ ಕರ್ಣಾಟ ದುರ್ಗೆ, ಭದ್ರಕರ್ಣಿಕೆ ಗೋಕರ್ಣಕ್ಷೇತ್ರ ನಿಲಯೆ !
ನಿನ್ನ ಪಾದಪಂಥವ ತೊಟ್ಟು ಎದ್ದಿಹೆವು ನಾವಿಂದು !
ಓ ಮಾತೆ, ನಿನ್ನ ಸಂಕಲ್ಪ ಸಾಧಿಸಲು
ಅಗ್ನಿಪಥವನು ತುಳಿದು ನುಗ್ಗುವೆವು ಮುಂದೆ !
ನಮ್ಮ ಭಾವಜ್ವಾಲಾ ಮಾಲೆಯ ಮುಡಿಸಿ,
ಪ್ರಾಣಫಲವನ್ನರ್ಪಿಸಿಹೆವು ನಿನ್ನಡಿಗೆ !
ಉದ್ದಂಡ ಧೈರ್ಯವನು ನೀನಿತ್ತು ಹರಸು,
ನಿನ್ನ ಬಲಗೊಂಡು ಬಂದೆಮಗೆ ಬಲವ ನೀಡು,
ಓ ಜನನಿ, ಭಯವಿನಾಶಿನಿ !

## १०

मातरिन्द्राणि कर्णाटवसुधेऽव प्रसीद नः ।
रक्षास्तेऽस्मत्पृष्ठदेशे सदा जाग्रतु जाग्रतु ॥

प्रविशामस्सत्यसीमां वयमद्य त्वरान्विताः ।
भीतिप्रत्यन्तसीमानं बलादुल्लङ्घयामहे ॥

भारत्यां धर्मसरणौ प्रयामस्सततं पुरः ।
कल्याणमेव लोकस्य चित्ते संकल्पयामहे ॥

वाण्येवाभयदा तेऽम्ब परमा संपदद्य नः ।
करुणाकलनाद्देवि तरुणान् कुण्ठतानिमान् ॥

सर्वेवुध्यान्मिके देवि पुरो नय पुरो नय
भिक्षामहि कृपामेकां मातृभक्षास्तु सैव नः ॥







## ೧೦

ಓ ಮಾತೆ, ಇಂದ್ರಾಣಿ, ಕರ್ಣಾಟಕಾಂಬೆ !
ನಮ್ಮ ಬೆನ್ನಿಂಗಿರಲಿ ನಿನ್ನ ರಕ್ಷೆ !
ನುಗ್ಗುವೆವು ನಾವಿಂದು ಸತ್ಯಸೀಮೆಯನು,
ದಾಟುವೆವು ನಾವಿಂದು ಭಯದ ಮೇರೆಯನು !
ಭಾರತಮಾರ್ಗವ ಹಿಡಿದು ಸಾಗುವೆವು ನಾವು !
ಮನುಕುಲದ ಕಲ್ಯಾಣವೇ ನಮ್ಮ ಗುರಿ !
ನಿನ್ನ ಅಭಯಂ ತಾನೊಂದೆ ನಮ್ಮ ಸಿರಿ !
ನಿನ್ನ ಕರುಣಾವತರಣದಿಂದ ತರುಣರನು
ಮುನ್ನಡೆಸು ಮುನ್ನಡೆಸು ಜನನಿ,
ನಿನ್ನ ಕೃಪೆಯೊಂದೆ ಬೇಡುವೆವು ಮಾತೃಭಿಕ್ಷೆ !

११

वाराहि कर्णाटक मातृभूमे समूलमन्तस्थरिपून् जहि त्वम् ।
तवाऽभयालम्बबलाद्वरेण्ये सर्वे वयं चामृतसत्वयुक्ताः ॥

कल्याणशक्ते तव कार्यभारे सुबद्धकक्षा नितरां भवामः ।
काये च जीवे हृदयान्तराळे शक्तिः परा ते चरतात् प्रकामम् ॥

आविर्भवतु नश्चित्ते निर्मले दर्पणे यथा ।
तेऽनुभूतिर्जगन्मान्ये छायेव प्रतिम्बिबिता ॥







೧೧

ಓ ಕರ್ಣಾಟಕಾಂಬೆ, ವಾರಾಹಿ ! ನಮ್ಮ ಅಂತಃಸ್ಥ
ಶತ್ರುಗಳ ನಿರ್ಮೂಲಗೊಳಿಸು !
ಅಮೃತಸತ್ತ್ವರು ನಾವು
ನಿನ್ನಭಯ ಬಲದಿಂದ !
ಓ ಕಲ್ಯಾಣಶಕ್ತಿ ! ನಿನ್ನ ಕಾರ್ಯದಲ್ಲಿ
ನಿರತರಾಗಿ ನಿಲ್ಲುವೆವು ನಾವು !
ನಮ್ಮ ಶರೀರ-ಪ್ರಾಣ-ಮನಗಳಲಿ
ನಿನ್ನ ಮಹಾಶಕ್ತಿ ಸಂಚಾರವಾಗಲಿ !
ನಮ್ಮ ಹೃದಯದಲಿ ನಿನ್ನ ಅನುಭೂತಿ ಆವಿರ್ಭವಿಸಲಿ !

१२

हे जननि देवमातः अदिते कर्णाटकुलजननि ।
उत्तिष्ठ भाग्यभरिते मङ्गलनिलये समुत्तिष्ठ ॥

अमृततनूजा वयमपि भगवति भवतीं समाराध्य ।
भागवता भूयास्मो नेष्यामो जीवितं सफलम् ॥

तव भुवि वारिणि वायौ कौमुद्यामातपे च परिपूर्णात् ।
तव मधुरप्रेमभरात् मधुमयमम्बास्तु जीवनं सततम् ॥

त्वच्छरणानां मातः प्रपूर्य चित्तं शरीरं च ।
आगच्छास्तु कृपा ते श्रीरक्षा नः सहायार्थम् ॥





ಅದಿತಿ



೧೨

ಓ ಮಾತೆ ಅದಿತಿ, ಕರ್ಣಾಟ ದೇವ ಜನನಿ
ಭಾಗ್ಯ· ನಿಧಿಯೆ ಏಳು
ನಿನ್ನ ಅಮೃತಪುತ್ರರು ನಾವು, ನಿನ್ನನು .
ನಿತ್ಯವು ನೋಂತು ಭಾಗವತರಾಗುವೆವು!
ನಿನ್ನ ನೆಲದ ನೀರಿನಲಿ, ಬಯಲು ಗಾಳಿಯಲಿ
ಬಿಸಿಲು – ಬೆಳದಿಂಗಳಲಿ ತುಂಬಿರುವ
ನಿನ್ನ ಮಧುರ ಪ್ರೇಮದಿಂದ ನಮ್ಮ ಜೀವನವು
ಮಧುಮಯವಾಗಲಿ ಜನನಿ!
ನಿನ್ನ ನಂಬಿದ ನಮ್ಮ ಮೈಮನವನ್ನು ತುಂಬಿ ಬಾ
ನಮ್ಮ ಬೆಂಬಲಕೆ ಇರಲಿ ನಿನ್ನ ಶ್ರೀರಕ್ಷೆ!

## १३

कौमारि देवि कर्णाटमातर्भगवतीश्वरि ।
बद्धाञ्जलिपुटा भक्ताः तव प्रासादतोरणे ॥

तिष्ठन्त्यादिश तान् भृत्यान् आज्ञापय महेश्वरि ।
देहं चित्तं जीवितं च पादाभ्यामर्चयन्ति ते ॥

निमित्तं सर्वकार्याणां त्वमम्बाद्यैव कङ्कणम् ।
बधान कार्यसिद्ध्यर्थं प्रसीदाम्ब प्रसीद नः ॥

तव प्रसादाज्जननि भूयात्कर्णाटमण्डले ।
विचित्रा नूतना सृष्टिः जय कर्णाटमेदिनि ॥





ಕೌಮಾರಿ



## ೧೩

ಓ ಭಗವತಿಯೆ, ಕರ್ಣಾಟ ಕೌಮಾರಿ!
ನಿನ್ನ ಮಂದಿರದ ಮಹಾದ್ವಾರದಲ್ಲಿ ನಿನ್ನ ಭಕ್ತರು
ಬದ್ಧಾಂಜಲಿಯಾಗಿ ನಿಂತಿದ್ದಾರೆ – ಹೇಳು!
ಅವರಿಗೆ ನಿನ್ನಾಣತಿಯ ಹೇಳು!
ತಮ್ಮ ತನು – ಮನ – ಪ್ರಾಣಗಳನು
ನಿನ್ನಡಿಗೆ ನಿವೇದಿಸಿಹರು!
ಸಕಲ ಕಾರ್ಯ ಕಾರಣಳೆ, ನಿನ್ನ ಕಾರ್ಯಕೆ ಇಂದೆ
ಕಂಕಣ ಕಟ್ಟು! ನಿನ್ನ ಪ್ರಸಾದದಿಂದೆ
ಬರಲಿ ಕನ್ನಡಕುಲಕೆ ಹೊಸಹುಟ್ಟು!

१४

हे कर्णाटमहायोगशक्ते संचरणं तव ।
मूलाधारात्सहस्रारपर्यन्तं प्रविराजते ॥

महीशूरपुरान्मूलाधारात्त्वं जाग्रती सती ।
अम्बोर्ध्वगामिनी भूत्वा जयिनी भव योगिनि ॥

वयं विश्वविजेतारः जागृत्या तव सर्वथा ।
अज्ञातापजयाः शाक्ताः जितं जन्मभयं तथा ॥

योगस्था महिमानं ते गायामो देवि सर्वदा ।
भोगिनो मातृकरुणालाभं तव भजामहे ॥

क्षुद्रभावाद्विमुक्ताः स्मः महाभावसमन्विताः ।
योगानन्दात्मिके मातः योगेऽस्मिन् सिद्धिरस्तु नः ॥




ಕುಂಡಲಿನೀ



೧೪

ಓ ಮಾತೆ, ಕರ್ಣಾಟ ಯೋಗ ಶಕ್ತಿ !
ನಮ್ಮ ಮೂಲಾಧಾರದಿಂದ ಸಹಸ್ರಾರದ ವರೆಗೂ
ನಿನ್ನ ಅಜಸ್ರ ಸಂಚಾರವಿದೆ ತಾಯಿ !
ಮೈಸೂರ ಮೂಲಾಧಾರದಿಂದ ನೀನೆ ಜಾಗೃತಳಾಗಿ
ಊರ್ಧ್ವಗಾಮಿನಿಯಾಗು, ಜನನಿ !
ನಿನ್ನ ಜಾಗೃತಿಯಿಂದ ನಾವೆಲ್ಲ ವಿಶ್ವವಿಜಯಿಗಳು,
ಹುಟ್ಟಾ ಗೆಲ್ಲಬಲ್ಲ, ಸೋಲರಿಯದ ಶಾಕ್ತರಾವು !
ಯೋಗಸ್ಥರಾಗಿ ನಿನ್ನ ಮಹಿಮೆಯನು ಹಾಡುವೆವು.
ಭೋಗಿಗಳಾಗಿ ನಿನ್ನ ಮಾತೃಕೃಪೆಯನ್ನುಪಭೋಗಿಸುವೆವು
ಕ್ಷುದ್ರ ಭಾವದಿಂದ ಮುಕ್ತರಾಗಿ ನಿನ್ನ
ಮಹದ್ಭಾವದಿಂದ ಯುಕ್ತರಾಗುವೆವು ಅಂಬೆ !